# ಕರ್ನಾಟಕ ವಿಧಾನ ಪರಿಷತ್ತು

| | | | |
|---|---|---|---|
| 1 | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1127 (1201) |
| 2 | ಸದಸ್ಯರ ಹೆಸರು | : | ಶ್ರೀ ರಘುನಾಥ ರಾವ್ ಮಲ್ಕಾಪೂರೆ |
| 3 | ಉತ್ತರಿಸಬೇಕಾದ ದಿನಾಂಕ | : | 16-03-2021 |
| 4 | ಉತ್ತರಿಸುವ ಸಚಿವರು | : | ನಗರಾಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ) | ಬೀದರ್ ನಗರದಲ್ಲಿ ಒಳಚರಂಡಿ ಮತ್ತು ಕುಡಿಯುವ ನೀರು ವ್ಯವಸ್ಥೆ ಕಲ್ಪಿಸುವ ಕಾರ್ಯಕ್ಕೆ ಕೈಗೆತ್ತಿಗೊಂಡಿರುವ ಕಾಮಗಾರಿಗಳು ಯಾವುವು; | ಏಷ್ಯಿಯನ್ ಅಭಿವೃದ್ಧಿ ಬ್ಯಾಂಕ್ ನೆರವಿನ ಉತ್ತರ ಕರ್ನಾಟಕ ನಗರ ವಲಯ ಬಂಡವಾಳ ಹೂಡಿಕಾ ಕಾರ್ಯಕ್ರಮದಡಿಯಲ್ಲಿ (ಎನ್.ಕೆ.ಯು.ಎಸ್.ಐ.ಪಿ) ಬೀದರ್ ನಗರದಲ್ಲಿ ಒಳಚರಂಡಿ ಮತ್ತು ಕುಡಿಯುವ ನೀರು ವ್ಯವಸ್ಥೆಗೆ ಕೆಳಕಂಡ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ.<br>**ಒಳಚರಂಡಿ ವ್ಯವಸ್ಥೆ (ಎರಡು ಪ್ಯಾಕೇಜುಗಳಲ್ಲಿ):**<br>• ಒಳಚರಂಡಿ ಜಾಲ : 83.00 ಕಿಮಿ<br>• ಮ್ಯಾನ್ ಹೋಲ್ : 2702 ಸಂಖ್ಯೆ<br>• ರಿಸೀವಿಂಗ್ ಚೇಂಬರ್ : 3905 ಸಂಖ್ಯೆ<br>• ಏರು ಕೊಳವೆ : 0.8 ಕಿಮಿ<br>• ಜಲ ತ್ಯಾಜ್ಯ ಸಂಸ್ಕರಣ ಘಟಕ 17 ಎಂಎಲ್‌ಡಿ<br>**ನೀರು ವ್ಯವಸ್ಥೆ (ಮೂರು ಪ್ಯಾಕೇಜುಗಳಲ್ಲಿ):**<br>• ಮೂಲ್ ಸ್ಥಾವರ - 1 ಸಂಖ್ಯೆ<br>• ಎಲೆಕ್ಟ್ರಿಕಲ್-ಮೆಕ್ಯಾನಿಕಲ್ ಉಪಕರಣಗಳು<br>• ಗುರುತ್ವಾಕರ್ಷಣ / ಏರು ಕೊಳವೆ: 18.83 ಕಿ.ಮೀ<br>• ಜಲಶುದ್ಧೀಕರಣಗಾರ - 28 ಎಂಎಲ್‌ಡಿ<br>• ಓಹೆಚ್‌ಟಿ - 7 ಸಂಖ್ಯೆ<br>• ಫೀಡರ್ ಲೈನ್ - 17.21 ಕಿ.ಮೀ<br>• ವಿತರಣಾ ಜಾಲ - 286.78 ಕಿ.ಮೀ<br>• ಮನೆ ಸಂಪರ್ಕ - 33195 ಸಂಖ್ಯೆ<br>ಅಮೃತ್ ಯೋಜನೆಯಡಿ ಕೈಗೊಳ್ಳಲಾಗಿರುವ ಒಳಚರಂಡಿ ಕಾಮಗಾರಿಗಳ ವಿವರ ಈ ಕೆಳಗಿನಂತಿವೆ.<br><br>**ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-2 ಕ್ಕೆ ಒಳಚರಂಡಿ ಯೋಜನೆ:-**<br>ಸದರಿ ಯೋಜನೆಯನ್ನು ರೂ. 116.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | **ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3ಕ್ಕೆ ಒಳಚರಂಡಿ ಯೋಜನೆ (ಹೆಚ್ಚುವರಿ ಅನುದಾನ):-**<br><br>ಸದರಿ ಯೋಜನೆಯನ್ನು ರೂ. 57.79 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ.<br><br>**ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3 & 1 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಯೋಜನೆ (ಉಳಿತಾಯ ಮೊತ್ತದಲ್ಲಿ):-**<br><br>ಸದರಿ ಯೋಜನೆಯನ್ನು ರೂ. 17.70 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ.<br><br>ಬೀದರ ನಗರದಲ್ಲಿ ಕುಡಿಯುವ ನೀರು ಸರಬರಾಜು ವಿತರಣಾ ಜಾಲ ಅಳವಡಿಸಲು ಬೀದರ ನಗರವನ್ನು 19 ವಲಯಗಳನ್ನಾಗಿ ವಿಂಗಡಿಸಿ, ಅವುಗಳಲ್ಲಿ 14 ವಲಯದ ವಿತರಣಾ ಜಾಲ ಅಳವಡಿಸುವ ಕಾಮಗಾರಿಯನ್ನು ಕೆ.ಯು.ಐ.ಡಿ.ಎಫ್.ಸಿ. ವತಿಯಿಂದ ಕೈಗೊಳ್ಳಲಾಗಿರುತ್ತದೆ. ಬಾಕಿ ಉಳಿದ 05 ವಲಯ ( ವಲಯ-1, 2, 3, 7 ಮತ್ತು 8) ಗಳಲ್ಲಿ ವಿತರಣಾ ಜಾಲ ಅಳವಡಿಸುವ ಕಾಮಗಾರಿಯನ್ನು ರೂ.24.90 ಕೋಟಿಗಳ ಅಂದಾಜು ವೆಚ್ಚದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ ನಗರದ ಸುಧಾರಿತ ನೀರು ಸರಬರಾಜು ಯೋಜನೆಯಡಿ ಕೈಗೊಂಡಿದ್ದು, ಸದರಿ ಕಾಮಗಾರಿಯನ್ನು ವರ್ಷ-2016 ರಲ್ಲಿ ಪೂರ್ಣಗೊಳಿಸಿ, ವರ್ಷ-2017ರಲ್ಲಿ ನಗರಸಭೆ ಬೀದರ ಇವರಿಗೆ ಹಸ್ತಾಂತರಿಸಲಾಗಿದೆ. |
| ಆ) | ಒಳಚರಂಡಿ ನಿರ್ಮಾಣ ಹಂತ 1ರ ಕಾಮಗಾರಿ ಪೂರ್ಣವಾಗಿದ್ದರೂ ಸಾರ್ವಜನಿಕರಿಗೆ ಉಪಯೋಗಕ್ಕೆ ಬಾರದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಈ ಯೋಜನೆ ವಿಫಲವಾಗಲು ಕಾರಣಗಳೇನು; | ಎನ್‌ಕೆಯುಎಸ್‌ಐಪಿ ಯೋಜನೆಯಡಿ ಒಳಚರಂಡಿ ಕಾಮಗಾರಿ ಬೀದರ್ ನಗರ ಪ್ರದೇಶದ ಶೇ.33% ಕ್ಷೇತ್ರದ ವ್ಯಾಪ್ತಿಯಲ್ಲಿ ಒಳಚರಂಡಿ ಕಾಮಗಾರಿ ಗುತ್ತಿಗೆ ಕರಾರಿನಂತೆ ಕೈಗೊಳ್ಳಲಾಗಿದ್ದು, ಕಾಮಗಾರಿ ಪೂರ್ಣಗೊಂಡಿರುತ್ತದೆ. ಆದರೆ, ಈ ಯೋಜನೆಯಡಿ ಒಳಚರಂಡಿ ಗೃಹ ಸಂಪರ್ಕ ನೀಡಲು ಅವಕಾಶ ವಿರುವುದಿಲ್ಲ. ಇದನ್ನು ಸಂಬಂಧಪಟ್ಟ ಬಳಕೆದಾರರು ಅವರ ವೆಚ್ಚದಲ್ಲಿ ಮಾಡಬೇಕಾಗಿರುತ್ತದೆ.<br><br>ನಗರಸಭೆ ವತಿಯಿಂದ ಗೃಹ ಸಂಪರ್ಕಗಳನ್ನು ಇದುವರೆಗೆ 12198 ಮನೆಗಳ ಪೈಕಿ, 3000 ಮನೆಗಳಿಗೆ ಮಾತ್ರ ಒಳಚರಂಡಿ ಸಂಪರ್ಕ ಪಡೆಯಲಾಗಿದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಇದರಿಂದ ಸುಮಾರು ಶೇ.25 ರಷ್ಟು ಗೃಹ ಸಂಪರ್ಕ ಆಗಿದ್ದು, ಇದರ ತ್ಯಾಜ್ಯ ನೀರು ಒಳಚರಂಡಿ ಕೊಳವೆ ಜಾಲದ ಮೂಲಕ ಹರಿದು ಎಸ್.ಟಿ.ಪಿ ಘಟಕಕ್ಕೆ ಸೇರುತ್ತಿದೆ. ಸದ್ಯಕ್ಕೆ ಸುಮಾರು 1.50 ಎಂಎಲ್‌ಡಿ ಮಾತ್ರ ತ್ಯಾಜ್ಯ ನೀರು ಹರಿದು ಬರುತ್ತಿದೆ, ಇದು ಬಹಳ ಅಲ್ಪ (ವಿನ್ಯಾಸದಂತೆ 17 ಎಂಎಲ್‌ಡಿ) ಪ್ರಮಾಣವಾಗಿರುತ್ತದೆ. ಇದರಿಂದ ಎಸ್‌ಟಿಪಿ ಘಟಕವು ಪೂರ್ಣ ಪ್ರಮಾಣದಲ್ಲಿ ಕಾರ್ಯನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ನಗರಸಭೆ ವತಿಯಿಂದ ತ್ವರಿತವಾಗಿ ಒಳಚರಂಡಿ ಮನೆ ಸಂಪರ್ಕವನ್ನು ನೀಡಲು ಕ್ರಮ ಕೈಗೊಳ್ಳಬೇಕಾಗಿದೆ. ತ್ಯಾಜ್ಯವು ಎಸ್.ಟಿ.ಪಿ ಘಟಕಕ್ಕೆ ಹರಿದು ಬರುತ್ತಿರುವುದರಿಂದ ಒಳಚರಂಡಿ ಕೊಳವೆ ಜಾಲವು ಕಾರ್ಯ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ.<br><br>ಒಳಚರಂಡಿ ಜಾಲದಿಂದ ಹರಿದುಬಂದ ಅಲ್ಪ ಪ್ರಮಾಣ ತ್ಯಾಜ್ಯವನ್ನು ಎಸ್‌ಟಿಪಿ ಘಟಕವು ಸಂಸ್ಕರಿಸುತ್ತಿದೆ. ಆದುದರಿಂದ, ಯೋಜನೆಯು ವಿಫಲತೆ ಕಂಡುಬಂದಿರುವುದಿಲ್ಲ. ಪೂರ್ಣ ಪ್ರಮಾಣದಲ್ಲಿ ಗೃಹ ಸಂಪರ್ಕಗಳನ್ನು ನಗರಸಭೆಯವರು ನೀಡಿದ ಮೇಲೆ ಪೂರ್ಣ ಪ್ರಮಾಣದಲ್ಲಿ ಕಾರ್ಯ ನಿರ್ವಹಿಸುತ್ತದೆ.<br><br>ಈ ಯೋಜನೆಯಡಿ ನಿರ್ಮಿಸಿರುವ ಎಸ್‌ಟಿಪಿ ಘಟಕವನ್ನು ಚಾಲನೆಗೊಳಿಸಿದಾಗ ಏರಿಯೇಟರ್ ಲಗೂನ್ ತಳ ಭಾಗದಲ್ಲಿ ಅಲ್ಪ ಪ್ರಮಾಣದ ಸೋರುವಿಕೆ ಕಂಡು ಬಂದಿರುವ ಕಾರಣ ಗುತ್ತಿಗೆದಾರರಿಗೆ ನೋಟಿಸ್ ಜಾರಿ ಮಾಡಿದೆ. ಸದರಿ ಸೋರುವಿಕೆ ಬಂದ ಎಸ್‌ಟಿಪಿ ಘಟಕ ದುರಸ್ತಿ ಪಡಿಸಲು ಕೈಗೊಳ್ಳುವ ತಾಂತ್ರಿಕ ಮಾರ್ಗದರ್ಶನ ಕುರಿತು ಭೂ ವಿಜ್ಞಾನ ತಜ್ಞರ ಅದ್ಯಕ್ಷತೆಯಲ್ಲಿದ್ದ ಸಮಿತಿಯಲ್ಲಿ ಸದರಿ ವಿಷಯಕ್ಕೆ ಸಂಬಂಧಿಸಿದ ದಾಖಲೆ ಮಂಡಿಸಲಾಗಿ, ಸಮಿತಿಯವರು ದಾಖಲೆಗಳನ್ನು ಪರಿಶೀಲಿಸಿ ಸೋರುವಿಕೆಯನ್ನು ತಡೆಗಟ್ಟಲು ಕೆಲವು ತಾಂತ್ರಿಕ ಸಲಹೆ ಸೂಚನೆಗಳನ್ನು ನೀಡಿರುತ್ತಾರೆ. ಅದರಂತೆ, ಗುತ್ತಿಗೆದಾರರಿಗೆ ಕ್ರಮವಹಿಸಲು ಆದೇಶಿಸಿದೆ. ಸದ್ಯಕ್ಕೆ ಎಸ್‌ಟಿಪಿ ಘಟಕದಲ್ಲಿ ಸೋರುವಿಕೆ ಕಡಿಮೆಯಾಗಿದ್ದು, ಒಳಚರಂಡಿ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತಿದೆ. ಆದುದರಿಂದ, ಯೋಜನೆಯು ವಿಫಲವಾಗಿರುವುದಿಲ್ಲ. |
| ಇ) | ಅಮೃತ್ ಯೋಜನೆ ಅಡಿಯಲ್ಲಿ 3 ಹಂತಗಳಲ್ಲಿನ ಕಾಮಗಾರಿಗಳ ಪೈಕಿ ಕೈಗೆತ್ತಿಕೊಂಡ ಕಾಮಗಾರಿಗಳು ಪೂರ್ಣಗೊಂಡಿದೆಯೇ; ಇದಕ್ಕೆ | ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ಬೀದರ ನಗರದಲ್ಲಿ ಅಮೃತ ಯೋಜನೆಯಡಿ ಕೈಗೊಳ್ಳಲಾಗಿರುವ ಒಳಚರಂಡಿ ಕಾಮಗಾರಿಗಳ ವಿವರ ಈ ಕೆಳಗಿನಂತಿವೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | ತಗುಲಿರುವ ವೆಚ್ಚ ಎಷ್ಟು; ಈ ಕಾಮಗಾರಿಗಳ ನಿರ್ವಹಣೆ ಸಮರ್ಪಕ ರೀತಿಯಲ್ಲಿ ಆಗದಿರುವುದಕ್ಕೆ ಕಾರಣಗಳೇನು ? | **ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-2 ಕ್ಕೆ ಒಳಚರಂಡಿ ಯೋಜನೆ:-**<br><br>ಸದರಿ ಯೋಜನೆಯನ್ನು ರೂ. 116.00 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಒಟ್ಟು 132.90 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ, 12109 ಸಂಖ್ಯೆ ಒಳಚರಂಡಿ ಗೃಹ ಸಂಪರ್ಕಗಳು ಹಾಗೂ 17.26 ಎಮ್.ಎಲ್.ಡಿ ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ಘಟಕದ ಕಾಮಗಾರಿಗಳನ್ನು ಕೈಗೊಂಡು ಪೂರ್ಣಗೊಳಿಸಲಾಗಿದೆ. ಸದರಿ ಯೋಜನೆಯನ್ನು ಡಿಸೆಂಬರ್-2019 ರಲ್ಲಿ ಪೂರ್ಣಗೊಳಿಸಿ ಚಾಲನೆಗೊಳಿಸಲಾಗಿದೆ. ಫೆಬ್ರುವರಿ-2021 ರ ಅಂತ್ಯದವರೆಗೆ ಈ ಯೋಜನೆಗೆ ರೂ. 98.14 ಕೋಟಿ ವೆಚ್ಚ ಮಾಡಲಾಗಿದೆ.<br><br>**ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3ಕ್ಕೆ ಒಳಚರಂಡಿ ಯೋಜನೆ(ಹೆಚ್ಚುವರಿ ಅನುದಾನ):-**<br><br>ಸದರಿ ಯೋಜನೆಯನ್ನು ರೂ. 57.79 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಒಟ್ಟು 67.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ, 8025 ಸಂಖ್ಯೆ ಒಳಚರಂಡಿ ಗೃಹ ಸಂಪರ್ಕಗಳು ಹಾಗೂ 7.00 ಎಮ್.ಎಲ್.ಡಿ ಸಾಮರ್ಥ್ಯದ ಮಲೀನ ನೀರು ಸಂಸ್ಕರಣಾ ಘಟಕದ ಕಾಮಗಾರಿಗಳನ್ನು ಪ್ರಸ್ತಾಪಿಸಲಾಗಿದ್ದು, ಸದರಿ ಯೋಜನೆಯಡಿ 61.80 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 6060 ಸಂಖ್ಯೆ ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ಕಾಮಗಾರಿಗಳು ಪೂರ್ಣಗೊಂಡಿದೆ. ವೆಟ್‌ವೆಲ್ ಹಾಗೂ 7.00 ಎಂ.ಎಲ್.ಡಿ ಮಲೀನ ನೀರು ಸಂಸ್ಕರಣ ಘಟಕ ನಿರ್ಮಿಸಲು ಸ್ಥಳವನ್ನು ದಿನಾಂಕ 02.02.2021 ರಂದು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಗೆ ಹಸ್ತಾಂತರಿಸಲಾಗಿದ್ದು ಕಾಮಗಾರಿಗಳು ಪ್ರಗತಿಯಲ್ಲಿವೆ. ಫೆಬ್ರುವರಿ-2021ರ ಅಂತ್ಯದವರೆಗೆ ಈ ಯೋಜನೆಗೆ ರೂ.32.66 ಕೋಟಿ ವೆಚ್ಚ ಮಾಡಲಾಗಿದೆ. ಸದರಿ ಕಾಮಗಾರಿಯನ್ನು ಡಿಸೆಂಬರ್-2021ರಲ್ಲಿ ಚಾಲನೆಗೊಳಿಸಲು ಉದ್ದೇಶಿಸಲಾಗಿದೆ. |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | **ಕೇಂದ್ರ ಪುರಸ್ಕೃತ ಅಮೃತ್ ಯೋಜನೆಯಡಿ ಬೀದರ್ ನಗರದ ವಲಯ-3 & 1 ರ ಬಿಟ್ಟು ಹೋದ ಪ್ರದೇಶಗಳಲ್ಲಿ ಒಳಚರಂಡಿ ಯೋಜನೆ(ಉಳಿತಾಯ ಮೊತ್ತದಲ್ಲಿ):-**<br><br>ಸದರಿ ಯೋಜನೆಯನ್ನು ರೂ.17.70 ಕೋಟಿ ಅಂದಾಜು ಮೊತ್ತದಲ್ಲಿ ಕೈಗೆತ್ತಿಕೊಳ್ಳಲಾಗಿದೆ. ಒಟ್ಟು 38.90 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 2300 ಸಂಖ್ಯೆ ಒಳಚರಂಡಿ ಗೃಹ ಸಂಪರ್ಕಗಳ ಕಾಮಗಾರಿಗಳನ್ನು ಪ್ರಸ್ತಾಪಿಸಲಾಗಿದ್ದು, ಸದರಿ ಯೋಜನೆಯಡಿ 14.00 ಕಿ.ಮೀ ಉದ್ದದ ಒಳಚರಂಡಿ ಕೊಳವೆ ಮಾರ್ಗ ಹಾಗೂ 150 ಸಂಖ್ಯೆಯ ಒಳಚರಂಡಿ ಗೃಹ ಸಂಪರ್ಕ ಅಳವಡಿಸುವ ಕಾಮಗಾರಿಗಳು ಪೂರ್ಣಗೊಂಡಿದೆ. ಫೆಬ್ರುವರಿ-2021ರ ಅಂತ್ಯದವರೆಗೆ ಈ ಯೋಜನೆಗೆ ರೂ.1.77 ಕೋಟಿ ವೆಚ್ಚ ಮಾಡಲಾಗಿದೆ. ಕೋವಿಡ್-19 ರಿಂದ ಕಾಮಗಾರಿ ವಿಳಂಬವಾಗಿರುತ್ತದೆ. ಬಾಕಿ ಉಳಿದ ಕಾಮಗಾರಿಗಳು ಪ್ರಗತಿಯಲ್ಲಿದ್ದು, ಯೋಜನೆಯನ್ನು ಜುಲೈ 2021 ರಲ್ಲಿ ಪೂರ್ಣಗೊಳಿಸಲು ಉದ್ದೇಶಿಸಲಾಗಿದೆ.<br><br>ಬೀದರ ನಗರಕ್ಕೆ ಅಮೃತ ಯೋಜನೆಯಡಿ ಒಟ್ಟು 20469 ಗೃಹ ಸಂಪರ್ಕಗಳ ಪೈಕಿ 7270 ಗೃಹ ಸಂಪರ್ಕಗಳನ್ನು ಸಾರ್ವಜನಿಕರ ಮನೆಯವರೆಗೆ ಕಲ್ಪಿಸಲಾಗಿದೆ. ಸುಮಾರು 3.5 ಎಂ.ಎಲ್.ಡಿ. ಮಲೀನ ನೀರನ್ನು ಸಂಸ್ಕರಣಾ ಘಟಕದಲ್ಲಿ ಶುದ್ಧೀಕರಿಸಲಾಗುತ್ತಿದೆ. ಒಳಚರಂಡಿ ವ್ಯವಸ್ಥೆಯು ಸಂಪೂರ್ಣವಾಗಿ ಕಾರ್ಯ ನಿರ್ವಹಿಸಲು ಎಲ್ಲಾ ಗೃಹ ಸಂಪರ್ಕಗಳನ್ನು ನಗರಸಭೆ, ಬೀದರ್ ರವರು ಒಳಚರಂಡಿ ವ್ಯವಸ್ಥೆಗೆ ಜೊಡಣೆ ಮಾಡುವುದನ್ನು ಕಡ್ಡಾಯ ಮಾಡುವ ಮೂಲಕ ಒಳಚರಂಡಿ ವ್ಯವಸ್ಥೆಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳಬಹುದಾಗಿದೆ. |
| ಈ) | ಬೀದರ್ ನಗರಕ್ಕೆ ಕುಡಿಯುವ ನೀರನ್ನು ಪೂರೈಕೆ ಮಾಡಲು ಎಷ್ಟು ಹಂತದ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; ಈ ಕಾಮಗಾರಿಗಳಗೆ ಆಗಿರುವ ವೆಚ್ಚ ಎಷ್ಟು; ಕಾಮಗಾರಿಗಳು ಯಾವ ಹಂತದಲ್ಲಿದೆ; | ಬೀದರ್ ನಗರಕ್ಕೆ ಕುಡಿಯುವ ನೀರನ್ನು ಪೂರೈಕೆ ಮಾಡಲು 03 ಹಂತದಲ್ಲಿ ಕಾಮಗಾರಿಯನ್ನು ಕೈಗೊಳ್ಳಲಾಗಿದೆ. 01 ಮತ್ತು 02ನೇ ಹಂತದ ಕುಡಿಯುವ ನೀರಿನ ಕಾಮಗಾರಿಗಳನ್ನು ಕೆ.ಯು.ಐ.ಡಿ.ಎಫ್.ಸಿ. ವತಿಯಿಂದ ಕೈಗೊಂಡಿದ್ದು, ವಿವರಗಳು ಈ ಕೆಳಕಂಡಂತಿರುತ್ತದೆ:<br><br>1) ಸಗಟು ನೀರು ಸರಬರಾಜು ಅಭಿವೃದ್ಧಿಪಡಿಸುವುದು, 28 ಎಂಎಲ್‌ಡಿ ನೀರು ಶುದ್ಧೀಕರಣ ಘಟಕ ನಿರ್ಮಿಸುವುದು ಹಾಗೂ ಪಂಪಿಂಗ್ ಮೆಷಿನರಿ ಅಳವಡಿಸುವುದು, ಏರು ಕೊಳವೆ ಮತ್ತು |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಗುರುತ್ವಾಕರ್ಷಣ ಕೊಳವೆಗಳನ್ನು ಮೂಲ ಸ್ಥಾವರದಿಂದ ಬೀದರ್ ನಗರದವರೆಗೆ ಅಳವಡಿಸುವ ಕಾಮಗಾರಿ ಪೂರ್ಣಗೊಂಡಿದ್ದು, ನಗರಸಭೆಗೆ ಹಸ್ತಾಂತರಿಸಲಾಗಿದೆ. ವೆಚ್ಚವಾಗಿರುವ ಮೊತ್ತ : ರೂ.27.14 ಕೋಟಿ<br>2) 153 ಕಿಮಿ ನೀರು ವಿತರಣಾ ಜಾಲ, 7 ಮೇಲುತೊಟ್ಟಿಗಳ ನಿರ್ಮಾಣ ಮತ್ತು ಅವುಗಳಗೆ ನೀರು ತುಂಬುವ ವಿತರಣಾ ಜಾಲ (Feeder main). ಕಾಮಗಾರಿ ಪೂರ್ಣಗೊಂಡಿದ್ದು, ನಗರಸಭೆಗೆ ಹಸ್ತಾಂತರಿಸಲಾಗಿದೆ. ವೆಚ್ಚವಾಗಿರುವ ಮೊತ್ತ : ರೂ.27.19 ಕೋಟಿ<br>3) 24x7 ನಿರಂತರ ನೀರು ಸರಬರಾಜು ಯೋಜನೆ: 286.78 ಕಿ.ಮಿ ವಿತರಣಾ ಜಾಲ ಮತ್ತು 33195 ಸಂಖ್ಯೆ ಮನೆಗಳಗೆ ನಳ ಸಂಪರ್ಕ ನೀಡುವ ಕಾಮಗಾರಿ. ಕಾಮಗಾರಿ ಪೂರ್ಣಗೊಂಡಿದ್ದು, ಸದ್ಯ ಕಾರ್ಯಚರಣೆ ಮತ್ತು ನಿರ್ವಹಣೆಯನ್ನು ಗುತ್ತಿಗೆದಾರರು ಕರಾರಿನಂತೆ ನಿರ್ವಹಿಸುತ್ತಿದ್ದಾರೆ. ನಿರ್ಮಾಣ ಕಾಮಗಾರಿ ವೆಚ್ಚ : ರೂ.32.82 ಕೋಟಿ<br>ಬಾಕಿ ಉಳಿದ 05 ವಲಯ (ವಲಯ-1, 2, 3, 7 ಮತ್ತು 8) ಗಳಲ್ಲಿ ವಿತರಣಾ ಜಾಲ ಅಳವಡಿಸುವ ಕಾಮಗಾರಿಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ರೂ. 24.90 ಕೋಟಿಗಳ ಅಂದಾಜು ವೆಚ್ಚದಲ್ಲಿ ಬೀದರ ನಗರದ ಸುಧಾರಿತ ನೀರು ಸರಬರಾಜು ಯೋಜನೆಯಡಿ ಕೈಗೊಂಡಿದ್ದು, ಸದರಿ ಕಾಮಗಾರಿಯನ್ನು ವರ್ಷ-2016 ರಲ್ಲಿ ಪೂರ್ಣಗೊಳಿಸಿ, ವರ್ಷ-2017 ರಲ್ಲಿ ನಗರಸಭೆ ಬೀದರ್ ಇವರಿಗೆ ಹಸ್ತಾಂತರಿಸಲಾಗಿದೆ. ಸದರಿ ಯೋಜನೆಗೆ ಇಲ್ಲಿಯವರೆಗೆ ರೂ. 22.85 ಕೋಟಿಗಳ ವೆಚ್ಚ ಮಾಡಿ, ಮುಕ್ತಾಯ ವರದಿ ಸಲ್ಲಿಸಲಾಗಿದೆ. |
| ಉ) | ಬೀದರ್ ನಗರಕ್ಕೆ ಪ್ರತಿ ದಿನ ಕುಡಿಯುವ ನೀರು ಲಭ್ಯವಾಗದೇ ಇರಲು ಕಾರಣಗಳೇನು; ಪ್ರತಿ ದಿನ ಕುಡಿಯುವ ನೀರು ಪೂರೈಕೆ ಮಾಡಲು ಕೈಗೊಂಡಿರುವ ಶಾಶ್ವತ ಕ್ರಮಗಳೇನು? | ಬೀದರ್ ನಗರಕ್ಕೆ 24x7 ನಿರಂತರ ನೀರು ಸರಬರಾಜು ಯೋಜನೆಯನ್ನು ವಿನ್ಯಾಸಿಸುವಾಗ ಮಾಂಜ್ರ ಜಲಾಶಯ ಮತ್ತು ಕಾರಾಂಜ ಜಲಾಶಯ ಮೂಲದಿಂದ ಸಗಟು ನೀರನ್ನು ಪಂಪು ಮಾಡಲಾಗುತ್ತಿತ್ತು. 2014 ನೇ ಇಸವಿಯಲ್ಲಿ ಮಾಂಜ್ರ ನದಿಯು ಬೇಸಿಗೆಯಲ್ಲಿ ಬತ್ತಿಹೋದ ಕಾರಣ ಈ ಮೂಲದ ನೀರು ಸರಬರಾಜನ್ನು ಸ್ಥಗಿತಗೊಳಿಸಿರುತ್ತಾರೆ. ಈಗ ಕಾರಾಂಜಾ ನದಿ ಮೂಲ ಒಂದರಿಂದಲೇ ಬರುವ 18 ಎಂಎಲ್‌ಡಿ ನೀರಿನಲ್ಲಿ ಬೀದರ್ ನಗರದ ನಿರ್ವಹಣೆ ಮಾಡಬೇಕಾಗಿದೆ. ಇದರಿಂದ ದಿನ ಬಿಟ್ಟು ದಿನ ಹೊಸ |

| ಕ್ರ. ಸಂ. | ಪ್ರಶ್ನೆಗಳು | ಉತ್ತರ |
|---|---|---|
| | | ಕೊಳವೆಯಿಂದ ನೀರು ಸರಬರಾಜು ಮಾಡಲಾಗುತ್ತಿದೆ. ಇದರಿಂದ ನೀರು ಕೊರತೆಯಾಗಿದೆ. ಆದ್ದರಿಂದ 24/7 ನೀರು ಪೂರೈಕೆಯಲ್ಲಿ ತೊಂದರೆಯಾಗಿದೆ. ಇದನ್ನು ಸರಿಪಡಿಸಲು ಹೆಚ್ಚುವರಿ ಪಂಪುಗಳನ್ನು (3 ಹಂತದಲ್ಲಿ) ಅಳವಡಿಸಿ ಹಾಗೂ ನಗರದ ಫೀಡರ್ ಲೈನ್ ಉನ್ನತೀಕರಿಸಲು ಸುಮಾರು ರೂ.20.00 ಕೋಟಿ ಹಣಕಾಸಿನ ಅವಶ್ಯಕತೆ ಇದೆ ಎಂದು ಅಂದಾಜು ಮಾಡಲಾಗಿದೆ. ಆದರೆ, ಇದರ ತಾಂತ್ರಿಕ ಸಧೃಡತೆ ಹಾಗೂ ವಿನ್ಯಾಸಗಳನ್ನು ಪರಿಶೀಲಿಸಿದ ನಂತರ ಈ ಬಗ್ಗೆ ಅಗತ್ಯ ಕ್ರಮವಹಿಸಲಾಗುವುದು. |

ಕಡತ ಸಂಖ್ಯೆ: ನಅಇ 72 ಪಿ.ಆರ್.ಜೆ 2021

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು